## ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1754 |
| ಸದಸ್ಯರ ಹೆಸರು | ಡಾ..ವೈ.ಎ.ನಾರಾಯಣಸ್ವಾಮಿ (ಶಿಕ್ಷಕರ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | 23-03-2020 |
| ಉತ್ತರಿಸಬೇಕಾದ ಸಚಿವರು | ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು ಹಾಗೂ ಸಕಾಲ ಸಚಿವರು |

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ) | ಕರ್ನಾಟಕ ರಾಜ್ಯದಲ್ಲಿ 7ನೇ ತರಗತಿಗೆ ಪಬ್ಲಿಕ್ ಪರೀಕ್ಷೆ ಮಾಡಲು ಸರ್ಕಾರ ಚಿಂತಿಸಿದೆಯೇ; ಚಿಂತಿಸಿದ್ದರೆ, ವಿವರಗಳನ್ನು ನೀಡುವುದು; | National Educational Policy 2019ರಲ್ಲಿ ಪ್ರಾಥಮಿಕ ಶಿಕ್ಷಣದ ಕಲಿಕೆಯ ಗುಣಮಟ್ಟವನ್ನು ಬಲವರ್ದನೆಗೊಳಿಸುವುದು ಅವಶ್ಯವೆಂದು ಪ್ರತಿಪಾದಿಸಿರುವ ಹಿನ್ನೆಲೆಯಲ್ಲಿ ಎಸ್.ಎಸ್.ಎಲ್.ಸಿ ತರಗತಿಯ ಪರೀಕ್ಷೆಗಿಂತ ಪೂರ್ವದಲ್ಲಿ ಯಾವುದಾದರೊಂದು ತರಗತಿಗೆ ರಾಜ್ಯ ಮಟ್ಟದಲ್ಲಿ ಸಮಾನ ಪರೀಕ್ಷೆ ನಡೆಸುವುದು ಸೂಕ್ತವೆಂದು ನಿರ್ಣಯಿಸಿದ್ದು, ಅದರಂತೆ ಪ್ರಸ್ತುತ ವರ್ಷದಲ್ಲಿ ಈ ಪ್ರಕ್ರಿಯೆಯನ್ನು ಹಮ್ಮಿಕೊಳ್ಳಲು ಸಮಯಾವಕಾಶದ ಕೊರತೆಯಿರುವುದರಿಂದ ಸಾಧಕ-ಬಾಧಕಗಳು ಪರಿಶೀಲಿಸಿದ ತರುವಾಯ ಈ ಸಂಬಂಧ ಪೋಷಕರ, ಸಾರ್ವಜನಿಕರ, ಶಿಕ್ಷಕರು, ತಜ್ಞರು ಮತ್ತು ಎಲ್ಲಾ ಹಿತಾಸಕ್ತಿದಾರರ ಅಭಿಪ್ರಾಯವನ್ನು ಪಡೆದು, ನಿರಂತರ ಮತ್ತು ಸಮಗ್ರ ಮೌಲ್ಯಮಾಪನದ (CCE) ಎಲ್ಲಾ ಅಂಶಗಳನ್ನು ಗಮನಿಸಿ ರಾಜ್ಯಪಠ್ಯಕ್ರಮದ 7ನೇ ತರಗತಿಯಲ್ಲಿ ವ್ಯಾಸಂಗ ಮಾಡುತ್ತಿರುವ ಸರ್ಕಾರಿ,ಅನುದಾನಿತ ಮತ್ತು ಅನುದಾನರಹಿತ ಶಾಲೆಗಳ ವಿದ್ಯಾರ್ಥಿಗಳಿಗೆ ಸರ್ಕಾರಿ ಆದೇಶ ಸಂಖ್ಯೆ: ಇಡಿ 311 ಪಿಜಿಸಿ 2019, ದಿನಾಂಕ:07.02.2020ರಂದು 2019-20ನೇ ಸಾಲಿನಲ್ಲಿ ಸಾಮಾನ್ಯ ಮೌಲ್ಯಾಂಕನ ನಡೆಸಲು ಉದ್ದೇಶಿಸಲಾಗಿತ್ತು.<br>ಪ್ರಸ್ತುತ ಕೊರೋನಾ ವೈರಸ್ ಸೋಂಕನ್ನು ತಡೆಗಟ್ಟುವ ಮುಂಜಾಗ್ರತಾ ಕ್ರಮವಾಗಿ ಸದರಿ ಪರೀಕ್ಷೆಯನ್ನು ದಿನಾಂಕ: 31.03.2020 ರವರೆಗೆ ಮುಂದೂಡಲಾಗಿದೆ. |
| ಆ) | 2020-21ರ ಶೈಕ್ಷಣಿಕ ವರ್ಷಕ್ಕೆ ತಿಂಗಳ 2 ಶನಿವಾರ 2 ದಿನ ಬ್ಯಾಗ್ ರಹಿತ ತರಲು ಸರ್ಕಾರ ಯೋಚಿಸಿದೆಯೇ? (ಯೋಚಿಸಿದ್ದರೆ, ಅದರ ರೂಪುರೇಷಗಳನ್ನು ತಿಳಿಸುವುದು) | ಶಾಲಾ ಮಕ್ಕಳು ಕೊಂಡೊಯ್ಯುತ್ತಿರುವ ಶಾಲಾ ಚೀಲದ ಭಾರದ ಬಗ್ಗೆ ಕಳಕಳಿಯ ಅಭಿಪ್ರಾಯಗಳು ವ್ಯಕ್ತವಾಗುತ್ತಿರುವ ಹಿನ್ನೆಲೆಯಲ್ಲಿ 1986ರ ಹೊಸ ಶಿಕ್ಷಣ ನೀತಿ, 1993ರ ಯಶ್‌ಪಾಲ್ ನೇತೃತ್ವದ ರಾಷ್ಟ್ರೀಯ ಸಲಹಾ ಸಮಿತಿಯ ವರದಿ ಹಾಗೂ 2005ರ ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು ಕೂಡಾ ಹೊರೆಯಿಲ್ಲದ ಕಲಿಕೆಯ ಬಗ್ಗೆ ಪ್ರತಿಪಾದಿಸಿವೆ. ಈ ನಿಟ್ಟಿನಲ್ಲಿ ಗುಣಾತ್ಮಕ ಮತ್ತು ಸಂತಸದಾಯಕ ಕಲಿಕೆಯನ್ನು ಪ್ರೇರೇಪಿಸಲು ಪ್ರತಿ ತಿಂಗಳು 2 ಶನಿವಾರಗಳಂದು 'ಬ್ಯಾಗ್ ರಹಿತ ದಿನ'ವನ್ನು (No Bag Day) 2020-21 ನೇ ಸಾಲಿನಲ್ಲಿ ಆಯೋಜಿಸಲು ಉದ್ದೇಶಿಸಿದೆ.<br>2020-21 ನೇ ಸಾಲಿನ ಆಯವ್ಯಯದಲ್ಲಿ ಘೋಷಿಸಿರುವ ಹೊಸ ಕಾರ್ಯಕ್ರಮಗಳ ಅನ್ವಯ ಬ್ಯಾಗ್ ರಹಿತ ದಿನವನ್ನು ತಿಂಗಳಿಗೆ ಎರಡು ಶನಿವಾರಗಳಂದು 'ಸಂಭ್ರಮ ಶನಿವಾರ' ಎಂದು ಆಚರಿಸಲಾಗುವುದು. ಸಹಪಠ್ಯ ಮತ್ತು ಪಠ್ಯ ಚಟುವಟಿಕೆಗಳ ನಡುವೆ ಸಹ |

| | | |
|---|---|---|
| | | ಸಂಬಂಧ ಕಲ್ಪಿಸಲು, ಸಂತಸದ ಕಲಿಕೆಯ ಮೂಲಕ ಚಟುವಟಿಕೆ ಆಧಾರಿತ ಕಲಿಕೆಯನ್ನು ಪ್ರೋತ್ಸಾಹಿಸಲು ಹಾಗೂ ಮಕ್ಕಳಲ್ಲಿ ಸರ್ವತೋಮುಖ ಬೆಳವಣಿಗೆಗೆ ಅವಶ್ಯವಾಗಿರುವ ಮೌಲ್ಯಗಳನ್ನು ಅಭಿವೃದ್ಧಿಪಡಿಸಲು ಆರೋಗ್ಯಕರ ಜೀವನಶೈಲಿ, ಸ್ವಾಸ್ಥ್ಯ ಮತ್ತು ಶುಚಿತ್ವ ನಾಗರಿಕ ಸೌಲಭ್ಯಗಳು ಇತ್ಯಾದಿಯಂತಹ ದೇಶದ ಉತ್ತಮ ನಾಗರಿಕರಾಗಲು ಅವಶ್ಯವಿರುವ ವಿಷಯಗಳ ಬಗ್ಗೆ ಆ ದಿನಗಳಂದು ಮಕ್ಕಳಿಗೆ ಚಟುವಟಿಕೆಗಳ ಮೂಲಕ ಅರಿವು ಮೂಡಿಸಲಾಗುವುದು. |

**ಇಡಿ 56 ಪಿಜಿಸಿ 2020**

[ಎಸ್.ಸುರೇಶ್ ಕುಮಾರ್]
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ
ಸಕಾಲ ಸಚಿವರು.